KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜನವರಿ ೧, ೨೦೦೯ (ಪುಷ್ಯ ೧೧, ಶಕ ವರ್ಷ ೧೯೩೦) | ಸಂಚಿಕೆ ೧ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಅಧಿಸೂಚನೆ**

**ನಂ.ಜಿನಕೋ ಎಸ್ ಎಲ್ ಎಂ/ಸಿ ಆರ್/111/2006-07, ದಿನಾಂಕ: 10ನೇ ನವೆಂಬರ್ 2008**

ಭದ್ರಾವತಿ, ನಗರಸಭೆ ವ್ಯಾಪ್ತಿಯಲ್ಲಿನ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ತಗ್ಗಾದ ಜಾಗಗಳಿದ್ದು, ಸದರಿ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿ ಹಾಗೂ ಜನ ಸಂದಣಿಯಿಂದ ಕೂಡಿದ್ದು, ಹಾಲಿ ಇರುವ ಗುಡಿಸಲು/ಕಟ್ಟಡಗಳು ದುರಸ್ತಿಯಿಲ್ಲದೇ ಕುಡಿಯುವ ನೀರು, ಬೀದಿ ದೀಪ, ರಸ್ತೆ ಚರಂಡಿ, ಶೌಚಾಲಯ ಇತ್ಯಾದಿ, ಈ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದರಿಂದ ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ಮತ್ತು ನಿರ್ಮೂಲನ) ಕಾಯಿದೆ 1973 ರ ಕಲಂ 3 ಪ್ರಕಾರ ಕೊಳಚೆ ಪ್ರದೇಶವೆಂದು ಘೋಷಿಸಲು ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ನಂ ಜಿನಕೋ ಎಸ್ ಎಲ್ ಎಂ ಸಿ ಆರ್ 111/2006-07 ದಿ:30.01.2007 ರಂತೆ ಕರ್ನಾಟಕ ರಾಜ್ಯ ಪತ್ರದ ಭಾಗ 6 ರಲ್ಲಿ ದಿ:22.02.2007 ರಂತೆ ಪುಟಸಂಖ್ಯೆ 260 ರಲ್ಲಿ ಪ್ರಕಟಿಸಲಾಗಿದೆ. ಈ ವಿಚಾರದಲ್ಲಿ ಯಾವುದೇ ತಕರಾರು ಬಂದಿಲ್ಲವೆಂದು ವರದಿಯಾಗಿದೆ. ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಬೆಂಗಳೂರು ರವರು ದಿ:15.09.2006 ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಅಂಗೀಕರಿಸಲಾಗಿದೆ.

ಭದ್ರಾವತಿ ನಗರಸಭೆ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವು ತಗ್ಗಾದ ಜಾಗದಲ್ಲಿದ್ದು, ಈ ಪ್ರದೇಶದಲ್ಲಿ ಇರುವ ವಾಸದ ಮನೆಗಳು ಒತ್ತೊತ್ತಾಗಿದ್ದು, ಜನ ಸಂದಣಿಯಿಂದ ಕೂಡಿದೆ. ಈ ಪ್ರದೇಶದಲ್ಲಿರುವ ಗುಡಿಸಲು/ಶೆಡ್‌ಗಳು ದುರಸ್ತಿಯಿಲ್ಲದೇ ಕುಡಿಯುವ ನೀರು ಬೀದಿದೀಪ, ರಸ್ತೆ, ಚರಂಡಿ, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದೇ ಸದರಿ ಪ್ರದೇಶವು ಮಾಲಿನ್ಯ ಹಾಗೂ ಅನಾರೋಗ್ಯ ವಾತಾವರಣದಿಂದ ಕೂಡಿರುವುದು

ದೃಢಪಡುವುದರಿಂದ ಕರ್ನಾಟಕ ಕೊಳಚೆ ಪ್ರದೇಶಗಳು (ಅಭಿವೃದ್ಧಿ ನಿರ್ಮೂಲನೆ) ಕಾಯಿದೆ 1973 ರ ಕಲಂ 03 ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪಂಕಜ ಕುಮಾರ ಪಾಂಡೆ, ಜಿಲ್ಲಾಧಿಕಾರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆಗಿರುವ ನಾನು ಈ ಕೆಳಕಂಡ ಷೆಡ್ಯೂಲ್ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸುತ್ತೇವೆ.

**ಷೆಡ್ಯೂಲ್**

| ಕ್ರ. ಸಂ. | ಪ್ರದೇಶದ ಹೆಸರು ಸದರಿ ಪ್ರದೇಶವು ಇರುವ ಸ್ಥಳದ ವಿವರ | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ಮಾಲೀಕರ ಹೆಸರು | ಪ್ರಸ್ತಾಪಿತ ಪ್ರದೇಶವು ಇರುವ ಜಾಗದ ವಿವರ | | |
|---|---|---|---|---|---|
| | | | ತಾಲ್ಲೂಕ್/ ಗ್ರಾಮ/ಎಕರೆ– ಗುಂಟೆ | ವಿಸ್ತೀರ್ಣ ಎಕರೆ ಗುಂಟೆ | ಚಕ್ಕುಬಂದಿ |
| 01 | ಭದ್ರಾವತಿ ನಗರ ಕವಲು ಗುಂದಿ ಎ.ಕೆ ಕಾಲೋನಿ ಕೊಳಚೆ ಪ್ರದೇಶ | ಗೊಂದಿ ಒಡ್ಲುಕೆರೆ | ಭದ್ರಾವತಿ ತಾಲ್ಲೂಕ್ ಕವಲುಗುಂದಿ ಗ್ರಾಮದ ಸ.ನಂ.26 | 1–20 | ಪೂರ್ವಕ್ಕೆ:ಸರ್ವೆ ನಂ.30ರ ಜಮೀನು<br>ಪಶ್ಚಿಮಕ್ಕೆ:ಸರ್ವೆ ನಂ.26ರ ಉಳಿಕೆ ಜಮೀನು<br>ಉತ್ತರಕ್ಕೆ:ಸರ್ವೆ ನಂ.29ರ ಉಳಿಕೆ ಜಮೀನು<br>ದಕ್ಷಿಣಕ್ಕೆ:ಸರ್ವೆನಂ.26ರ ಉಳಿಕೆ ಜಮೀನು |

**ಶ್ರೀ ಪಂಕಜ ಕುಮಾರ ಪಾಂಡೆ**
ಜಿಲ್ಲಾಧಿಕಾರಿ,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಪಿ.ಆರ್. 473**

**ತಹಶೀಲ್ದಾರರು, ತಾಲ್ಲೂಕು ಕಛೇರಿ, ಕುಂದಾಪುರ**

**ರೆಫ್ ಪಿ.ಪಿ.ಡಿ.ಆರ್.ಸಿ.ಆರ್:65/07–08, ದಿನಾಂಕ: 29ನೇ ನವೆಂಬರ್ 2008**

**ನಮೂನೆ–27**

**68(1)ನೇಯ ಪ್ರಕರಣ ನಿಯಮ 94ರನ್ವಯ ಘೋಷಣೆ**

ಈ ಕೆಳಗಿನ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿರುವ ಸರ್ಕಾರಿ ಪರಂಬೋಕು ಜಾಗವು ಸರಕಾರದ ಸ್ವತ್ತಾಗಿದ್ದು ಅದು ಸಾರ್ವಜನಿಕರ ಬಳಕೆಗಾಗಿ ಬೇಕಾಗಿಲ್ಲವೆಂದು ಸರಕಾರಕ್ಕೆ ಕಂಡು ಬಂದಿದೆ.

ಪ್ರಯುಕ್ತ ಈಗ ಕರ್ನಾಟಕ ಸರಕಾರದವರು ಕರ್ನಾಟಕ ಭೂ ಕಂದಾಯ ಅಧಿನಿಯಮ 68ನೇಯ ಪ್ರಕರಣದ (1)ನೇಯ ಉಪ ಪ್ರಕರಣದಿಂದ ಕೂಡಾ ಮಾಡಲಾದ ಅಧಿಕಾರಿಗಳನ್ನು ಉಪಯೋಗಿಸುತ್ತಾ ಪ್ರಸ್ತುತ ಸಾರ್ವಜನಿಕ ಪೋರಂಬೊಕು ಸಾರ್ವಜನಿಕ ಉದ್ದೇಶಕ್ಕೆ ಅವಶ್ಯಕತೆ ಇಲ್ಲ. ಮತ್ತು ಪೂರ್ವೊಕ್ತ ಜಮೀನಿನ ಮೇಲೆ ಸಾರ್ವಜನಿಕರಿಗೆ ಅಥವಾ ಎಲ್ಲಾ ವ್ಯಕ್ತಿಗಳಿಗೆ ಇರುವಂತಹ ಹಕ್ಕುಗಳ ರದ್ದುಪಡಿಸತಕ್ಕದ್ದೆಂದು ಈ ಮೂಲಕ ಪ್ರಸ್ತಾಪಿಸಿದೆ.

2) ಪೂರ್ವೊಕ್ತ ಸಾರ್ವಜನಿಕ ಜಮೀನಿನ ಎಲ್ಲಾ ವ್ಯಕ್ತಿಗಳಿಗೆ ಇರುವಂತಹ ಹಕ್ಕುಗಳು ಹಾಗೂ ಇತರೆ ಹಿತಾಸಕ್ತಿಯುಳ್ಳ ಅಥವಾ ಅಧಿಕಾರವನ್ನು ಹೊಂದಿರುವ ವ್ಯಕ್ತಿ, ಯಾವೊಬ್ಬ ಸದಸ್ಯರು ಈ ತಿಳುವಳಿಕೆ ಪತ್ರವು ಹೊರಟ ದಿನಾಂಕದಿಂದ ತೊಂಬತ್ತು ದಿನಗಳೊಳಗೆ ತಹಶೀಲ್ದಾರರಿಗೆ ಸದ್ರಿ ಪ್ರಸ್ತಾವನೆ ಬಗ್ಗೆ ತನಗಿರುವ ಆಕ್ಷೇಪಗಳನ್ನು ಕುರಿತು ಮತ್ತು ಹಿತಾಸಕ್ತಿ ಅಥವಾ ಹಕ್ಕಿನ ಬಗೆಗಿನ ಪರಿಹಾರದ ಮೊಬಲಗು ಮತ್ತು ಸಾರ್ವಜನಿಕರಿಗೆ ವಿರುದ್ಧ ಪರಿಣಾಮವಾಗಬಹುದಾದ ವಿವರಗಳನ್ನು ಲೇಖನದಲ್ಲಿ ಕೊಡತಕ್ಕದ್ದು. ಮತ್ತು ಉಕ್ತ ಆಕ್ಷೇಪಣೆಗಳು ಮತ್ತು ಹಕ್ಕುಗಳು ಉಕ್ತ ಪ್ರಕರಣದ ಉಪಪ್ರಕರಣದಲ್ಲಿ ಉಪ ಬಂಧಿಸಿದ ಪ್ರಕಾರ ತಹಶೀಲ್ದಾರರಿಂದ ಪರ್ಯಾಲೋಕಿಸಪಡತಕ್ಕದ್ದು.

**ಅನುಸೂಚಿ**

ಗ್ರಾಮ:ಕುಂಭಾಶಿ
ತಾಲ್ಲೂಕು:ಕುಂದಾಪುರ
ಜಿಲ್ಲೆ: ಉಡುಪಿ

**ಜಮೀನಿನ ವಿವರ**

| ಕ್ರ. ಸಂ. | ಸ.ನಂಬ್ರ | ಕಿ.ಸಂ. | ವಿಸ್ತೀರ್ಣ |
|---|---|---|---|
| 1) | 262/1ಎ | ದೇವಸ್ಥಾನ ಪೊರಂಬೋಕು | 8–52 |
| 2) | 262/1ಬಿ | ಪೊರಂಬೋಕು | 0–02 |
| 3) | 289/2 | ಸರ್ಕಾರಿ ಕಲ್ಗಣಿ | 5–54 |

ಮೇಲಿನಂತೆ ಎಲ್ಲಾ ಸ್ಥಳ

ಎಲ್ಲೆಗಳು

ಸ.ನಂಬ್ರ 262/1ಎ
ಪೂರ್ವ: ಸ.ನಂಬ್ರ 264
ಪಶ್ಚಿಮ: ಸ.ನಂಬ್ರ 6
ಉತ್ತರ:ಸ.ನಂಬ್ರ:289/2
ದಕ್ಷಿಣ:ಸ.ನಂಬ್ರ 262/2ಎ
ಸ.ನಂಬ್ರ:262/2ಸಿ
ಸ.ನಂಬ್ರ:262/2ಬಿ

ಸ.ನಂಬ್ರ 262/1ಬಿ
ಪೂರ್ವ:ಸ.ನಂ:262/1ಎ
ಪಶ್ಚಿಮ:ಸ.ನಂ.262/1ಎ
ಉತ್ತರ:ಸ.ನಂಬ್ರ 262/1ಎ
ದಕ್ಷಿಣ:ಸ.ನಂಬ್ರ 262/1ಎ

ಸ.ನಂಬ್ರ 289/2ಪಿ1
ಪೂರ್ವ:ಸ.ನಂಬ್ರ 264
ಪಶ್ಚಿಮ:ಸ.ನಂಬ್ರ 289/1
ಉತ್ತರ:ಸ.ನಂಬ್ರ 274/54
ದಕ್ಷಿಣ:ಸ.ನಂಬ್ರ 262/2ಬಿ

ಪಿ.ಆರ್. 479 ತಹಶೀಲ್ದಾರರು ಕುಂದಾಪುರ

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಕಣ್ಣೂರು ಗ್ರಾಮದ ಸ.ನಂ.50 ರಲ್ಲಿ 1–33 ಎಕರೆ/ಗುಂಟೆ ಸರ್ಕಾರಿ ಗೋಮಾಳದ ಜಮೀನನ್ನು ಕೃಷ್ಣರಾಜಪುರಂ ಗ್ರಾಮದ ಸ.ನಂ.58ರ ಕೆರೆ ಒತ್ತುವರಿ ಮಾಡಿ ಮನೆ ನಿರ್ಮಿಸಿಕೊಂಡಿರುವವರನ್ನು ಸ್ಥಳಾಂತರಿಸಿ, ಪುನರ್ ವಸತಿ ಕಲ್ಪಿಸಲು ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಸುತ್ತೋಲೆ ಸಂಖ್ಯೆ:ಆರ್.ಡಿ:70:ಎಲ್‌ಜಿಪಿ/2008, ದಿನಾಂಕ:8.8.2008.
2. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರ ಪತ್ರ ಸಂಖ್ಯೆ:ಎಲ್‌ಎನ್‌ಡಿ:ಸಿ.ಆರ್:207/08–09 ದಿನಾಂಕ:14.11.2008.

**ಪ್ರಸ್ತಾವನೆ:**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ಕೆ.ಆರ್. ಪುರಂ ಗ್ರಾಮದ ಸ.ನಂ.58 ಸರ್ಕಾರಿ ಕೆರೆಯಾಗಿದ್ದು, 18–32 ಎಕರೆ/ಗುಂಟೆ ವಿಸ್ತೀರ್ಣವಿರುತ್ತದೆ. ಅಲ್ಲದೆ ದ್ಯಾವಸಂದ್ರ ಗ್ರಾಮದ ಸ.ನಂ.46 ರಲ್ಲಿ 2–35 ಎಕರೆ/ಗುಂಟೆ ಜಮೀನಿದ್ದು, ಕೆ.ಆರ್.ಪುರಂ ಮತ್ತು ದ್ಯಾವಸಂದ್ರ ಗ್ರಾಮಗಳ ಮೇಲ್ಕಂಡ ವಿಸ್ತೀರ್ಣದ ಜಮೀನು ಒಳಗೊಂಡ ಗಂಗಶೆಟ್ಟಿ ಕೆರೆ ಆಗಿರುತ್ತದೆ.

ಸರ್ಕಾರದ ಅಧಿಸೂಚನೆ ಕ್ರಮಾಂಕ:ಪಿಡಬ್ಲ್ಯೂಡಿ:92 ಐಎಂಬಿ:85 ದಿನಾಂಕ:11.02.1988 ರಂತೆ ಶ್ರೀ ಲಕ್ಷ್ಮಣ್‌ರಾವ್ ವರದಿಯನ್ವಯ ಸದರಿ ಕೆರೆಯ ಸಂರಕ್ಷಣೆಗೆ ಅರಣ್ಯ ಇಲಾಖೆಗೆ ವಹಿಸಲು ಶಿಫಾರಸ್ಸಾಗಿರುತ್ತದೆ. ಅರಣ್ಯ ಇಲಾಖೆ ಉಸ್ತುವಾರಿಯಲ್ಲಿರುವ ಈ ಕೆರೆಯಲ್ಲಿ ಅನಧಿಕೃತ ಮನೆಗಳಿದ್ದು, ಸಂಜಯನಗರ ಸ್ಲಂ ಆಗಿರುತ್ತದೆ. ಐ.ಟಿ.ಐ. ಅಧಿಸೂಚಿತ ಪ್ರದೇಶ ಸಮಿತಿಯವರು 1993 ರಲ್ಲಿ 94 ಜನರಿಗೆ ಆಶ್ರಯ ಯೋಜನೆಯಡಿ ಹಕ್ಕು ಪತ್ರ ನೀಡಿ, ನಿವೇಶನಗಳನ್ನು ವಿತರಿಸಿದ್ದು, ಇವರಿಗೆ ವಿದ್ಯುತ್ ದೀಪದ ಸೌಕರ್ಯ, ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಿಕೊಡಲಾಗಿರುತ್ತದೆ.

ವಿಧಾನ ಪರಿಷತ್ ಸದಸ್ಯರ ಅರ್ಜಿ ಸಮಿತಿ ಸಭೆಯಲ್ಲಿ ಈ ಕೆರೆಯಲ್ಲಿರುವ ಒತ್ತುವರಿಯನ್ನು ಖುಲ್ಲಾಪಡಿಸಿ, ಕೆರೆ ಪ್ರದೇಶಕ್ಕೆ ಬೇಲಿ ಹಾಕುವಂತೆ ಹಾಗೂ ಅರ್ಜಿ ಸಮಿತಿಯ ಗಮನಕ್ಕೆ ತರಲು ಸೂಚನೆಯಾಗಿರುತ್ತದೆ. ಅದರಂತೆ ಹಿಂದಿನ ಒತ್ತುವರಿದಾರರನ್ನು ಸ್ಥಳಾಂತರಿಸುವುದು. ಅನಿವಾರ್ಯವಾಗಿದ್ದು, ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರು

ಕಣ್ಣೂರು ಗ್ರಾಮದ ಸ.ನಂ.50ರ ಸರ್ಕಾರಿ ಗೋಮಾಳದ ಜಮೀನಿನ ಪೈಕಿ 1–33 ಎಕರೆ/ಗುಂಟೆ ಜಮೀನನ್ನು ಪುನರ್ ವಸತಿ ಕಲ್ಪಿಸಲು ಗುರ್ತಿಸಿರುತ್ತಾರೆ.

ಕಣ್ಣೂರು ಗ್ರಾಮದ ಸ.ನಂ.50ರ ಮೂರು ಬ್ಲಾಕ್‌ಗಳಲ್ಲಿ ಬರುವ ಕ್ರಮವಾಗಿ 0–05 ಗುಂಟೆ, 1–06 ಎಕರೆ/ಗುಂಟೆ ಹಾಗೂ 0–22 ಗುಂಟೆ ಒಟ್ಟು 1–33 ಎಕರೆ/ಗುಂಟೆ ಜಮೀನಿಗೆ ರಸ್ತೆ ಸಂಪರ್ಕವಿದ್ದು, ವಸತಿ ನಿರ್ಮಾಣಕ್ಕೆ ಸೂಕ್ತವಾಗಿರುತ್ತದೆಂದು, ನ್ಯಾಯಾಲಯದಲ್ಲಿ ಪ್ರಕರಣಗಳು ದಾಖಲಾಗಿರುವುದಿಲ್ಲವೆಂದು, ಕಡತ ತಯಾರಿಸಿ ವರದಿ ಮಾಡಿರುತ್ತಾರೆ. ಅಂತೆಯೇ ಈ ಜಮೀನನ್ನು ಪುನರ್‌ವಸತಿಗಾಗಿ ಕಾಯ್ದಿರಿಸುವುದು ಸೂಕ್ತವೆಂದು ಭಾವಿಸಿದ್ದು ಈ ಕೆಳಕಂಡಂತೆ ಆದೇಶಿಸಿದೆ.

**ನಂ: ಎಲ್‌ಎನ್‌ಡಿ(ಎಸ್.ಎ) ಸಿಆರ್: 118/02–03, ದಿನಾಂಕ: 25ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಹಾಗೂ ವಿಧಾನ ಪರಿಷತ್ ಸದಸ್ಯರ ಅರ್ಜಿ ಸಮಿತಿ ನಿರ್ದೇಶನದಂತೆ, ಕೃಷ್ಣರಾಜುಪುರ ಗ್ರಾಮದ ಸ.ನಂ.58 ಮತ್ತು ದ್ಯಾವಸಂದ್ರ ಗ್ರಾಮದ ಸ.ನಂ.46ರ ಕೆರೆ ಜಮೀನಿನಲ್ಲಿ ಅನಧಿಕೃತವಾಗಿ ಸಣ್ಣ ಸಣ್ಣ ಮನೆಗಳನ್ನು ಕಟ್ಟಿಕೊಂಡು ವಾಸವಾಗಿರುವ ಒತ್ತುವಾರಿದಾರರನ್ನು ಖುಲ್ಲಾಪಡಿಸಿ ಪುನರ್ ವಸತಿ ಕಲ್ಪಿಸಲು, ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಕಣ್ಣೂರು ಗ್ರಾಮದ ಸ.ನಂ. 50 ರ ಬ್ಲಾಕ್ ನಂ.1 ರಲ್ಲಿ 0–05 ಗುಂಟೆ, ಬ್ಲಾಕ್ ನಂ.2ರಲ್ಲಿ 1–06 ಎಕರೆ/ಗುಂಟೆ, ಬ್ಲಾಕ್ ನಂ.3 ರಲ್ಲಿ 0–22 ಗುಂಟೆ ಒಟ್ಟು 1–33 ಎಕರೆ/ಗುಂಟೆ ವಿಸ್ತೀರ್ಣದ ಖುಲ್ಲಾ ಇರುವ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಕಲಂ 71 ರಡಿ ಕಾಯ್ದಿರಿಸಿ ಆದೇಶಿಸಿದೆ.

**ಹೆಚ್. ರಾಮಾಂಜನೇಯ**
ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 480

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಕಲಂ 4(1)ರ ತಿದ್ದುಪಡಿ ಅಧಿಸೂಚನೆ**

**ಎಲ್‌ಎಕ್ಯೂ.ಎಸ್.ಆರ್:36 ದಿನಾಂಕ: 20ನೇ ನವೆಂಬರ್ 2008**

ಕರ್ನಾಟಕ ಭೂಸ್ವಾಧೀನ ಕಾಯಿದೆ 33:91 ರ ಅನ್ವಯ ತಿದ್ದುಪಡಿಯಾದ ಕೇಂದ್ರ ಭೂಸ್ವಾಧೀನ ಅಧಿನಿಯಮ 1894 ರ ಕಲಂ 4ನೇ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರ ಆದೇಶ ಸಂ. ಎಲ್‌ಎಕ್ಯೂ.ಎಸ್‌ಆರ್:26/2007–08 ದಿನಾಂಕ: 3.10.2007 ರಂತೆ ಹೊರಡಿಸಿದ್ದ ಅಧಿಸೂಚನೆಯು ದಿನಾಂಕ 1.11.2007 ರ ಕರ್ನಾಟಕ ರಾಜ್ಯಪತ್ರದ ಭಾಗ–6ರ ಪುಟ ಸಂ. 969–970 ರಲ್ಲಿ ಪ್ರಕಟಗೊಂಡಿದ್ದು, ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವಂತೆ ತಿದ್ದುಪಡಿ ಮಾಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ಕಸಬಾ

**ತಾಲ್ಲೂಕು:** ತುಮಕೂರು **ಗ್ರಾಮ:** ತುಮಕೂರು

| ಕ್ರ. ಸಂ. | ಕಲಂ 4(1) ರ ಕ್ರ.ಸಂ. | ಕಲಂ 4(1)ರ ಅಧಿಸೂಚನೆಯಂತೆ ಪ್ರಕಟಗೊಂಡಿರುವುದು | | | ಕಲಂ 4(1)ರ ಅಧಿಸೂಚನೆಗೆ ತಿದ್ದುಪಡಿ ಮಾಡಿರುವುದು | | |
|---|---|---|---|---|---|---|---|
| | | ಖಾತಾನಂ. | ತರಹೆ | ವಿಸ್ತೀರ್ಣ ಚ.ಅಡಿ | ಖಾತಾ ನಂ. | ತರಹೆ | ವಿಸ್ತೀರ್ಣ ಚ.ಅಡಿ |
| 1 | 1 | 3326/1225 | ನಿವೇಶನ | 792 | 3326/1225 | ಕಟ್ಟಡ | 842 |
| 2 | 2 | 3325/1224 | ನಿವೇಶನ | 390 | 3325/1224 | ಕಟ್ಟಡ | 376 |
| 3 | 3 | 3324/1223 | ನಿವೇಶನ | 450.5 | 3324/1223 | ಕಟ್ಟಡ | 450.5 |

| ಕ್ರ. ಸಂ. | ಕಲಂ 4(1) ರ ಕ್ರ.ಸಂ. | ಕಲಂ 4(1)ರ ಅಧಿಸೂಚನೆಯಂತೆ ಪ್ರಕಟಗೊಂಡಿರುವುದು | | | ಕಲಂ 4(1)ರ ಅಧಿಸೂಚನೆಗೆ ತಿದ್ದುಪಡಿ ಮಾಡಿರುವುದು | | |
|---|---|---|---|---|---|---|---|
| | | ಖಾತಾನಂ. | ತರಹೆ | ವಿಸ್ತೀರ್ಣ ಚ.ಅಡಿ | ಖಾತಾ ನಂ. | ತರಹೆ | ವಿಸ್ತೀರ್ಣ ಚ.ಅಡಿ |
| 4 | 4 | 3323/ಎ 1222ಎ | ನಿವೇಶನ | 256.5 | 3323/ಎ 1222ಎ | ಕಟ್ಟಡ | 256.5 |
| 5 | 5 | 3322/ 1221 | ನಿವೇಶನ | 429 | 3322/ 1221 | ಕಟ್ಟಡ | 373 |
| 6 | 6 | 3323/ 1222 | ನಿವೇಶನ | 124 | 3323/ 1222 | ಕಟ್ಟಡ | 42 |

ಜಿಲ್ಲಾಧಿಕಾರಿಗಳು,
ಪಿ.ಆರ್. 481 ತುಮಕೂರು ಜಿಲ್ಲೆ, ತುಮಕೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ರದ್ದಿಯಾತಿ ಅಧಿಸೂಚನೆ**

**ಪ್ರಕರಣ ಸಂಖ್ಯೆ:ಎಲ್.ಎ.ಕ್ಯೂ.ಎಸ್.ಆರ್ 33/08–09, ದಿನಾಂಕ: 18ನೇ ನವೆಂಬರ್ 2008**

ಭೂ ಸ್ವಾಧೀನ ಕಾಯಿದೆ 1894 (ಸೆಂಟ್ರಲ್ ಕಾಯಿದೆ 1894)ರಂತೆ ವಿಧಿ 4(1)ರ ಅಧಿಸೂಚನೆ ಸಂಖ್ಯೆ:ಎಲ್ಎಕ್ಯೂ: ಎಸ್ಆರ್:68/2007–08, ದಿನಾಂಕ: 24.02.2008 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯ ದಿನಾಂಕ:17.04.2008ರ ಕರ್ನಾಟಕ ರಾಜ್ಯ ಪತ್ರದ ಪುಟ 562 ರಿಂದ 564 ರವರೆಗೆ ಭಾಗ–6ರಲ್ಲಿ ಮೇಲಿನವಳಗೆರಹಳ್ಳಿ ಗ್ರಾಮದ ಜಮೀನು ಹೇಮಾವತಿ ನಾಲಾ ಯೋಜನೆಗೆ ಭೂ ಸ್ವಾಧೀನಪಡಿಸಲು ಪ್ರಕಟಣೆ ಹೊರಡಿಸಿರುತ್ತದೆ. ಆದರೆ ಈ ಗ್ರಾಮಗಳ ಬಾಬ್ತು ಜಂಟಿ ಮೋಜಣಿ ಕಾರ್ಯ ಪೂರೈಸಿದಾಗ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಸರ್ವೆ ನಂಬರುಗಳ ಬಾಬ್ತು ಕಲಂ 4(1) ರಂತೆ ಪ್ರಕಟಿಸಲಾದ ವಿಸ್ತೀರ್ಣಕ್ಕಿಂತ ಕಡಿಮೆ ವಿಸ್ತೀರ್ಣ ಭೂ ಸ್ವಾಧೀನಕ್ಕೆ ಒಳಪಡುವುದೆಂದು ಕಂಡು ಬಂದಿರುವುದರಿಂದ ಕಲಂ 4(1)ರಲ್ಲಿ ಹೆಚ್ಚುವರಿಯಾಗಿ ಪ್ರಕಟವಾಗಿದ್ದು, ವಿಸ್ತೀರ್ಣವನ್ನು ರದ್ದುಪಡಿಸಲು ರದ್ದಿಯಾತಿ ಅಧಿಸೂಚನೆ ಹೊರಡಿಸಿರುವುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ದಬ್ಬೇಘಟ್ಟ
**ತಾಲ್ಲೂಕು:** ತುರುವೇಕೆರೆ **ಗ್ರಾಮ:** ಮೇಲಿನವಳಗೆರಹಳ್ಳಿ

| ಕ್ರ. ಸಂ. | 4(1)ರ ಕ್ರ.ಸಂ. | ಹಿಡುವಳಿದಾರರ ಹೆಸರುಗಳು | ಸ.ನಂ. | ಭೂ ಸ್ವಾಧೀನಕ್ಕೊಳಪಡದ ಕಡಿಮೆಯಾದ ವಿಸ್ತೀರ್ಣ |
|---|---|---|---|---|
| 1 | 2 | ಟಿ. ಶಿವಣ್ಣ ಬಿನ್ ತೋಪೇಗೌಡ | 128/5ಬಿ1 | 0–05 |
| 2 | 3 | ಟಿ. ಕೆಂಪೇಗೌಡ ಬಿನ್ ತೋಪೇಗೌಡ | 128/5ಬಿ2 | 0–10 |
| 3 | 19 | ಟಿ.ವೆಂಕಟೇಶ್ ಬಿನ್ ಎಂ.ಎಲ್. ತಮ್ಮಣ್ಣ, ಶಂಕರಯ್ಯ ಬಿನ್ ಉಡುಸಯ್ಯ | 134/1 | 0–03 |

ಜಿಲ್ಲಾಧಿಕಾರಿಗಳು,
ಪಿ.ಆರ್. 482 ತುಮಕೂರು ಜಿಲ್ಲೆ, ತುಮಕೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ತಿದ್ದುಪಡಿ ಅಧಿಸೂಚನೆ**

**ಪ್ರಕರಣ ಸಂಖ್ಯೆ:ಎಸ್.ಎಲ್.ಎ.ಓ.ಎಸ್.ಆರ್ 33/08–09, ದಿನಾಂಕ: 18ನೇ ನವೆಂಬರ್ 2008**

ಭೂ ಸ್ವಾಧೀನ ಕಾಯಿದೆ 1894 (ಸೆಂಟ್ರಲ್ ಕಾಯಿದೆ 1894)ರ ಕಲಂ 4(1)ರ ಅಧಿಸೂಚನೆ ಸಂಖ್ಯೆ:ಎಲ್ಎಕ್ಯೂ ಎಸ್ಆರ್/68/2007–08 ದಿನಾಂಕ: 24.02.2008 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯು ದಿನಾಂಕ:17.04.2008ರಂದು ಕರ್ನಾಟಕ ರಾಜ್ಯ ಪತ್ರದ ಪುಟ 562 ರಿಂದ 564 ರವರೆಗೆ ಭಾಗ–6ರಲ್ಲಿ ಮೇಲಿನವಳಗೇರಹಳ್ಳಿ ಗ್ರಾಮದ ಜಮೀನು ಹೇಮಾವತಿ ನಾಲಾ ಯೋಜನೆಗೆ ಪ್ರಕಟಗೊಂಡಿರುತ್ತದೆ. ಸದರಿ ಅಧಿಸೂಚನೆಯಲ್ಲಿ ಈ ಕೆಳಕಂಡ ತಪಶೀಲಿನಲ್ಲಿ ನಮೂದಿಸಿರುವಂತೆ ರದ್ದುಪಡಿ ಮಾಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ದಬ್ಬೇಘಟ್ಟ

**ತಾಲ್ಲೂಕು:** ತುರುವೇಕೆರೆ **ಗ್ರಾಮ:** ಮೇಲಿನವಳಗೇರಹಳ್ಳಿ

| 4(1)ರಂತೆ ಪ್ರಕಟವಾಗಿರುವುದು | | | | | ತಿದ್ದುಪಡಿಯಾಗಿರುವುದು | | |
|---|---|---|---|---|---|---|---|
| ಕ್ರ. ಸಂ. | 4(1) ಕ್ರಸಂ. | ಸ.ನಂ. | ತರಹೆ | ವಿಸ್ತೀರ್ಣ | ಸ.ನಂ. | ತರಹೆ | ವಿಸ್ತೀರ್ಣ |
| 1 | 1 | 192 | ಖುಷ್ಕಿ | 0–03 | 192 | ಖುಷ್ಕಿ | 0–02 |
| 2 | 6 | 128/5ಸಿ4 | ಖುಷ್ಕಿ | 0–09 | 128/5ಸಿ4 | ಖುಷ್ಕಿ | 0–06 |
| 3 | 10 | 127/1 | ಖುಷ್ಕಿ | 0–16 | 127/1 | ಖುಷ್ಕಿ | 0–13 |
| 4 | 12 | 169 | ಖುಷ್ಕಿ | 0–10 | 169 | ಖುಷ್ಕಿ | 0–08 |
| 5 | 13 | 125/3 | ಖುಷ್ಕಿ | 0–18 | 125/3 | ಖುಷ್ಕಿ | 0–10 1/2 |
| 6 | 15 | 125/1 | ಖುಷ್ಕಿ | 0–15 | 125/1 | ಖುಷ್ಕಿ | 0–11 |
| 7 | 16 | 235 | ಖುಷ್ಕಿ | 0–10 | 235 | ಖುಷ್ಕಿ | 0–6 1/2 |
| 8 | 18 | 236 | ಖುಷ್ಕಿ | 0–07 | 236 | ಖುಷ್ಕಿ | 0–05 |
| 9 | 20 | 172 | ಖುಷ್ಕಿ | 0–18 | 172 | ಖುಷ್ಕಿ | 0–15 1/2 |

ಜಿಲ್ಲಾಧಿಕಾರಿಗಳು,

ಪಿ.ಆರ್. 483 ತುಮಕೂರು ಜಿಲ್ಲೆ, ತುಮಕೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಕಲಂ 4(1) ತಿದ್ದುಪಡಿ ಅಧಿಸೂಚನೆ**

**ಪ್ರಕರಣದ ಸಂಖ್ಯೆ: ಎಲ್ ಎಕ್ಯೂ ಎಸ್ ಆರ್ 2/04–05, ದಿನಾಂಕ: 1ನೇ ನವೆಂಬರ್ 2008**

ಭೂ ಸ್ವಾಧೀನ ಕಾಯಿದೆ 1894 (ಸೆಂಟ್ರಲ್ ಕಾಯಿದೆ 1894) ರಂತೆ ವಿಧಿ 4(1)ರ ಅಧಿಸೂಚನೆ ಸಂಖ್ಯೆ: ಎಲ್ ಎಕ್ಯೂ ಎಸ್ ಆರ್ 2/04–05, ದಿ: 5.6.2007 ರಂತೆ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ಇವರಿಂದ ಅನುಮೋದಿಸಿದ್ದು ಸದರಿ ಅಧಿಸೂಚನೆಯು ದಿ:28.6.2007 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಭಾಗ–6 ಪುಟ ಸಂಖ್ಯೆ: 596, 597 ರಲ್ಲಿ ಪ್ರಕಟವಾಗಿರುತ್ತದೆ. ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ಜಿಲ್ಲೆ : ಕೋಲಾರ, ತಾಲ್ಲೂಕು: ಮಾಲೂರು ಎಂಬುದಾಗಿ ನಮೂದಾಗಿದ್ದು ಅದನ್ನು ಜಿಲ್ಲೆ: ಕೋಲಾರ, ತಾಲ್ಲೂಕು : ಕೋಲಾರ ಎಂಬುದಾಗಿ ತಿದ್ದುಪಡಿ ಮಾಡಲಾಗಿದೆ.

ಜಿಲ್ಲಾಧಿಕಾರಿಗಳು,

ಪಿ.ಆರ್. 495 ಕೋಲಾರ ಜಿಲ್ಲೆ, ಕೋಲಾರ.

**ಪುರಸಭಾ ಕಾರ್ಯಾಲಯ ಶಿಕಾರಿಪುರ**

**ಪುಶಿ/ಆವಿ/ಇತರೆ/04/2008–09, ದಿನಾಂಕ: 27ನೇ ನವೆಂಬರ್ 2008**

**ವಿಷಯ:** ಶಿಕಾರಿಪುರ ಪುರಸಭೆಯ ವ್ಯಾಪ್ತಿಯಲ್ಲಿನ ನೂತನ ಬಸ್ ನಿಲ್ದಾಣ ಮತ್ತು ಕಾನೂರು ಆಶ್ರಯ ಬಡಾವಣೆಗೆ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪರವರ ಹೆಸರನ್ನು ನಾಮಕರಣ ಮಾಡುವ ಕುರಿತು.

ಕರ್ನಾಟಕ ರಾಜ್ಯ ಪುರಸಭೆ ಕಾಯ್ದೆ 1964 ಕರ ಅಧಿನಿಯಮ 211 ರಲ್ಲಿ ಸೂಚಿಸಿರುವಂತೆ ಶಿಕಾರಿಪುರ ಪುರಸಭೆಯ ವ್ಯಾಪ್ತಿಯಲ್ಲಿನ ನೂತನ ಬಸ್ ನಿಲ್ದಾಣಕ್ಕೆ ಮತ್ತು ಕಾನೂರು ಆಶ್ರಯ ಬಡಾವಣೆಗೆ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಿ.ಎಸ್. ಯಡಿಯೂರಪ್ಪರವರ ಹೆಸರನ್ನು ನಾಮಕರಣ ಮಾಡಲು ಈ ಕಾರ್ಯಾಲಯದ ಸಾಮಾನ್ಯ ಸಭೆಯ ವಿಷಯ ಸಂ.10, ದಿನಾಂಕ:15.09.2008 ರಲ್ಲಿ ತೀರ್ಮಾನಿಸಲಾಗಿದ್ದು, ಸದರಿ ವಿಷಯದ ಬಗ್ಗೆ ಸಾರ್ವಜನಿಕರ ಯಾವುದೇ ಆಕ್ಷೇಪಣೆ ಮತ್ತು ತಂಟೆ ತಕರಾರುಗಳಿದ್ದಲ್ಲಿ ಪ್ರಕಟಣೆಗೊಂಡ ಒಂದು ತಿಂಗಳ ಒಳಗಾಗಿ ಲಿಖಿತ ಮೂಲಕ ಸಲ್ಲಿಸತಕ್ಕದ್ದು. ಅವಧಿ ಮೀರಿ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಕೆ. ವೆಂಕಟೇಶ್** **ಎಂ.ಎಂ. ಕರಭೀಮಣ್ಣನವರ್** ಕೆ.ಎಂ.ಎ.ಎಸ್.

ಪಿ.ಡಿ. 21 ಅಧ್ಯಕ್ಷರು ಮುಖ್ಯಾಧಿಕಾರಿ ಶ್ರೇಣಿ–1

ಪುರಸಭೆ ಶಿಕಾರಿಪುರ ಪುರಸಭೆ ಶಿಕಾರಿಪುರ.

**ಪುರಸಭಾ ಕಾರ್ಯಾಲಯ ಶಿಕಾರಿಪುರ**

**ಪುಶಿ/ಆವಿ/ಇತರೆ/05/2008-09, ದಿನಾಂಕ: 16ನೇ ಡಿಸೆಂಬರ್ 2008**

**ವಿಷಯ:** ಶಿಕಾರಿಪುರ ಪುರಸಭೆ ವ್ಯಾಪ್ತಿಯಲ್ಲಿನ ಜಾಹೀರಾತು ಶುಲ್ಕಗಳನ್ನು ಪರಿಷ್ಕರಣೆ ಮಾಡುವ ಕುರಿತು.

ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ: ನಗರ ಮತ್ತು ಪುರಸಭೆ ಕಾಯ್ದೆ 1964 ಕರ ಅಧಿನಿಯಮ 94 ರಲ್ಲಿನ ಉಪ ಪ್ರಕರಣ XIII ರಂತೆ ಶಿಕಾರಿಪುರ ಪುರಸಭೆಯ ವ್ಯಾಪ್ತಿಯಲ್ಲಿನ ಜಾಹೀರಾತು ಶುಲ್ಕಗಳನ್ನು ಪರಿಷ್ಕರಣೆ ಮಾಡಲು ಈ ಕಾರ್ಯಾಲಯದ ಠರಾವು ಸಂ.23, ದಿನಾಂಕ:14.07.2008ರಲ್ಲಿ ಈ ಕೆಳಕಾಣಿಸಿದಂತೆ ನಿಗಧಿಪಡಿಸಲು ತೀರ್ಮಾನಿಸಿರುವ ಮೇರೆಗೆ ಸಾರ್ವಜನಿಕರು ಮತ್ತು ಉದ್ದಿಮೆದಾರರು ಯಾವುದೇ ಆಕ್ಷೇಪಣೆ ಮತ್ತು ತಂಟೆ ತಕರಾರುಗಳಿದ್ದಲ್ಲಿ ಪ್ರಕಟಣೆಗೊಂಡ ಒಂದು ತಿಂಗಳ ಒಳಗಾಗಿ ಲಿಖಿತ ಮೂಲಕ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲಾ.

| ಕ್ರ. ಸಂ. | ಜಾಹಿರಾತು ವಿವರಗಳು | ಅಳತೆ ವಿವರ | ಪರಿಷ್ಕೃತ ವಾರ್ಷಿಕ ಶುಲ್ಕ | ಷರಾ |
|---|---|---|---|---|
| 1 | ಭೂಮಿ, ಕಟ್ಟಡ, ಗೋಡೆ, ಪ್ರಕಟಣಾ ಪಟಗಳು, ಚೌಕಟ್ಟು ಸ್ಥಂಭ ರಚನೆಗಳು ಇತ್ಯಾದಿಗಳ ಮೇಲೆ ದೀಪಾಲಂಕಾರ ಮಾಡದೇ ಜಾಹಿರಾತು ಪ್ರಚಾರಕ್ಕೆ | 1 ಚ.ಮಿ ಒಳಗೆ | ರೂ. 20 | |
| | | 1 ಚ.ಮಿ-2.5ಚ.ಮಿ ವರೆಗೆ | ರೂ. 80 | |
| | | 2.5 ಚ.ಮಿ ಮೇಲ್ಪಟ್ಟು ಪ್ರತಿ ಚ.ಮೀ ಒಂದಕ್ಕೆ | ರೂ. 30 | |
| 2 | ಭೂಮಿ, ಕಟ್ಟಡ, ಗೋಡೆ, ಪ್ರಕಟಣಾ ಪಟಗಳು, ಚೌಕಟ್ಟು ಸ್ಥಂಭ ರಚನೆಗಳು ಇತ್ಯಾದಿಗಳ ಮೇಲೆ ದೀಪಾಲಂಕಾರ ಮಾಡಿರುವ ಜಾಹಿರಾತು ಪ್ರಚಾರಕ್ಕೆ | 2 ಚ.ಮಿ ಒಳಗೆ | ರೂ. 50 | |
| | | 2 ಚ.ಮಿ-5 ಚ.ಮಿ ವರೆಗೆ | ರೂ. 100 | |
| | | 5 ಚ.ಮಿ ಮೇಲ್ಪಟ್ಟು ಪ್ರತಿ ಚ.ಮೀ. ಒಂದಕ್ಕೆ | ರೂ. 30 | |
| 3 | ಪ್ರಾಣಿಗಳು ಅಥವಾ ವಾಹನಗಳ ಮೇಲೆ ದೀಪಾಲಂಕಾರ ಮಾಡದೇ ಜಾಹಿರಾತು ಪ್ರಚಾರಕ್ಕೆ | 5 ಚ.ಮಿ ವರೆಗೆ | ರೂ. 100 | |
| | | 5 ಚ.ಮಿ ಮೇಲ್ಪಟ್ಟು ಪ್ರತಿ ಚ.ಮಿ ಗೆ | ರೂ. 25 | |
| 4 | ಪ್ರಾಣಿಗಳು ಅಥವಾ ವಾಹನಗಳ ಮೇಲೆ ದೀಪಾಲಂಕಾರ ಮಾಡಿರುವ ಜಾಹಿರಾತು ಪ್ರಚಾರಕ್ಕೆ | 5 ಚ.ಮಿ ವರೆಗೆ | ರೂ. 150 | |
| | | 5 ಚ.ಮಿ ಮೇಲ್ಪಟ್ಟು ಪ್ರತಿ ಚ.ಮಿ ಗೆ | ರೂ. 30 | |
| 5 | ಸಿನಿಮಾ ಮಂದಿರಗಳು ಮತ್ತು ಇತರೆ ಸಾರ್ವಜನಿಕ ಸ್ಥಳಗಳಲ್ಲಿ ಪ್ರೋಜೆಕ್ಟರ್, ಜಾರು ಗಾಜು ಸಾಧನಗಳ ಅಥವಾ ಅಂತವೇ ಸಾಧನಗಳ ಮೂಲಕ ಪರದೇಗಳ ಮೇಲೆ ಜಾಹಿರಾತು ಪ್ರಚಾರ | 1 ಚ.ಮಿ - 5 ಚ.ಮಿ | ರೂ. 100 | |
| | | 5 ಚ.ಮೀ ಮೇಲ್ಪಟ್ಟು ಪ್ರತಿ ಚ.ಮೀ. ಒಂದಕ್ಕೆ | ರೂ. 50 | |
| 6 | ಬೀದಿಗಳಿಗೆ ಅಡ್ಡಲಾಗಿ ತೂಗು ಹಾಕಿದ ದೀಪ ಅಲಂಕೃತ ಇಲ್ಲದ ಜಾಹಿರಾತು ಪ್ರಚಾರಕ್ಕೆ | 1 ಚ.ಮೀ.-5ಚ.ಮಿ | ರೂ. 150 | |
| | | 5 ಚ.ಮೀ. ಮೇಲ್ಪಟ್ಟು ಪ್ರತಿ ಚ.ಮೀ. ಗೆ | ರೂ. 30 | |
| 7 | ಮನೆಗಳು/ವಾಣಿಜ್ಯ ಮಳಿಗೆಗಳು ಇತ್ಯಾದಿಗಳ ಮೇಲೆ ಬಣ್ಣದಿಂದ ಜಾಹಿರಾತು ಪ್ರಚಾರಕ್ಕೆ | 5 ಚ.ಮೀ. ವರೆಗೆ | ರೂ. 150 | |
| | | 5 ಚ.ಮೀ. ಮೇಲ್ಪಟ್ಟು ಪ್ರತಿ ಚ.ಮೀ. ಗೆ | ರೂ. 30 | |
| 8 | ಕರಾರು ಪತ್ರಗಳು, ಗೋಡೆಯ ಮೇಲೆ ಕಂಬಗಳ ಮೇಲೆ ಜಾಹೀರಾತು ಪ್ರಚಾರಕ್ಕೆ | 5 ಚ.ಮಿ ಒಳಗೆ | ರೂ. 50 | ಮಾಸಿಕ ದರ |
| | | 5 ಚ.ಮಿ ಮೇಲ್ಪಟ್ಟು | ರೂ. 10 | |

**ಕೆ. ವೆಂಕಟೇಶ್**
ಅಧ್ಯಕ್ಷರು
ಪುರಸಭೆ ಶಿಕಾರಿಪುರ

**ಎಂ.ಎಂ. ಕರಭೀಮಣ್ಣನವರ್** ಕೆ.ಎಂ.ಎ.ಎಸ್.
ಮುಖ್ಯಾಧಿಕಾರಿ ಶ್ರೇಣಿ-1
ಪುರಸಭೆ ಶಿಕಾರಿಪುರ.

ಪಿ.ಡಿ. 22

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಭೂ ಸ್ವಾಧೀನ ಕಾಯ್ದೆ ಕಲಂ 4(1) ರ ಅಧಿಸೂಚನೆ ನಂ. ಎಲ್ ಎಕ್ಯೂ: ಎಸ್ ಆರ್: 04/08–09, ದಿನಾಂಕ: 14ನೇ ನವೆಂಬರ್ 2008

ಈ ಮುಂದಿನ ಅನುಸೂಚಿಯಲ್ಲಿ ಸೂಚಿಸಿರುವ ಜಮೀನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ, ಉತ್ತರಹಳ್ಳಿ ಗ್ರಾಮದ ಸ ನಂ 113ರಲ್ಲಿ 0–03 ಗುಂಟೆ ಜಮೀನು ಭೂ ಸ್ವಾಧೀನಪಡಿಸಿಕೊಂಡು ರಸ್ತೆ ನಿರ್ಮಿಸುವ ಉದ್ದೇಶಕ್ಕಾಗಿ ಲೋಕೋಪಯೋಗಿ ಇಲಾಖೆ ಪರವಾಗಿ ಬೇಕಾಗಬಹುದೆಂದು ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರಿಗೆ ಕಂಡು ಬಂದಿರುವುದರಿಂದ 1991ನೇ ಸಾಲಿನ ಕರ್ನಾಟಕ ಭೂ ಸ್ವಾಧೀನ ಅಧಿನಿಯಮ 33 ರಲ್ಲಿ ತಿದ್ದುಪಡಿಯಾದ ಭೂ ಸ್ವಾಧೀನ ಅಧಿನಿಯಮ ಸಂಖ್ಯೆ 1984ನೇ ಸಾಲಿನ ಭೂ ಸ್ವಾಧೀನ ಅಧಿನಿಯಮ ಮತ್ತು 1894ನೇ ಇಸವಿಯಲ್ಲಿ ತಿದ್ದುಪಡಿಯಾದ ಭೂಸ್ವಾಧೀನ ಕಾಯ್ದೆ ಅಧಿನಿಯಮ 4(2)ನೇ ಪ್ರಕರಣದಿಂದ ವಿಹಿತವಾದ ಅಧಿಕಾರಗಳನ್ನು ಉಪಯೋಗಿಸಲು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, 3ನೇ ಮಹಡಿ, ಬೆಂಗಳೂರು–1 ಇವರಿಗೆ ಮತ್ತು ಸಿಬ್ಬಂದಿಯವರಿಗೆ ಈ ಮೂಲಕ ಪ್ರಾಧಿಕಾರ ನೀಡಲಾಗಿದೆ.

ಕರ್ನಾಟಕ ಭೂ ಸ್ವಾಧೀನ ಕಾಯ್ದೆ ಅಧಿನಿಯಮ 4(1)ರ ಪ್ರಕಾರ ತಿಳಿಯಪಡಿಸುವುದೇನೆಂದರೆ ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳ ಯಾವೊಬ್ಬ ವ್ಯಕ್ತಿಯನ್ನು ಈ ಬಗ್ಗೆ ಆಕ್ಷೇಪಣೆಗಳನ್ನು ಮಾಡುವುದಿದ್ದರೆ ಅಂತಹ ಆಕ್ಷೇಪಣೆಗಳನ್ನು ಈ ಅಧಿಸೂಚನೆಯು ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗಾಗಿ 1961ನೇ ಸಾಲಿನ ಕರ್ನಾಟಕ ಅಧಿನಿಯಮ 17 ರಲ್ಲಿ ತಿದ್ದುಪಡಿಯಾದ 1894ನೇ ಸಾಲಿನ ಭೂ ಸಂಗ್ರಹಣ ಅಧಿನಿಯಮ (ಸಿ) ಭೂಸ್ವಾಧೀನ ಕಾಯ್ದೆ 1894ನೇ ಇಸವಿಯಲ್ಲಿ ತಿದ್ದುಪಡಿಯಾದ ಭೂ ಸ್ವಾಧೀನ ಅಧಿನಿಯಮ ಪ್ರಕರಣದ ಮೇರೆಗೆ ವಿಶೇಷ ಜಿಲ್ಲಾಧಿಕಾರಿಯವರ ಪ್ರಶಾಸನ ಕಾರ್ಯಗಳನ್ನು ನಿರ್ವಹಿಸಿ ನೇಮಕ ಮಾಡಲಾದ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, 3ನೇ ಮಹಡಿ, ಪೋಡಿಯಂ ಬ್ಲಾಕ್, ಬೆಂಗಳೂರು–1 ಇವರಿಗೆ ಸಲ್ಲಿಸತಕ್ಕದ್ದು.

ಸದರಿ ಜಮೀನಿನ ಅಧಿಕೃತ ಭೂಸ್ವಾಧೀನಕ್ಕಾಗಿ ನಿಯೋಜಿಸಲ್ಪಟ್ಟ ಯಾವೊಬ್ಬ ಮೋಜಣಿದಾರ ಅಥವಾ ಬೇರೆ ವ್ಯಕ್ತಿಗಳಿಗೆ ಅಡಚಣೆಯನ್ನುಂಟು ಮಾಡುವುದಾಗಲೀ ಮಾಡಬಾರದೆಂದು ಸದರಿ ಜಮೀನಿನಲ್ಲಿ ಆಸಕ್ತಿಯುಳ್ಳವರಿಗೆಲ್ಲಾ ಈ ಮೂಲಕ ಎಚ್ಚರಿಕೆ ಕೊಡಲಾಗಿದೆ. ಸದರಿ ಜಮೀನಿನಲ್ಲಿ ವಿಲೇವಾರಿಗಾಗಿ ಮಾರಾಟ, ಗುತ್ತಿಗೆ, ಅಡಮಾನ, ಹಸ್ತಾಂತರ ವಿನಿಮಯ ಅಥವಾ ಇನ್ನಾವುದೇ ರೀತಿಯ ಒಪ್ಪಂದಗಳನ್ನು ಅಥವಾ ಯಾವೊಂದು ವೆಚ್ಚ ಅಥವಾ ಯಾವೊಂದು ಅಭಿವೃದ್ಧಿಗಳನ್ನು ಈ ಅಧಿಸೂಚನೆಯು ಪ್ರಕಟವಾದ ನಂತರ ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ಇವರ ಮಂಜೂರಾತಿಯನ್ನು ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಪಡೆಯದೇ ಮಾಡಿದ ಪಕ್ಷದಲ್ಲಿ ಅಂತಿಮವಾಗಿ ಅಧಿಕೃತ ಸಂಗ್ರಹಣೆ ಮಾಡಲಾಗುವ ಸದರಿ ಜಮೀನಿನ ಅಂತಹ ಭಾಗಗಳಿಗೆ ಪರಿಹಾರವನ್ನು ನಿರ್ಧರಿಸುವ ಅಧಿಕಾರಿಯಿಂದ ಸದರಿ ಅಧಿನಿಯಮ 24ನೇ ಪ್ರಕರಣದ 7ನೇ ಖಂಡದ ಮೇರೆಗೆ ಉಪೇಕ್ಷಿಸಲಾಗುವುದು.

ಸದರಿ ಜಮೀನಿನ ಒಂದು ನಕ್ಷೆಯನ್ನು ವಿಶೇಷ ಭೂ ಸ್ವಾಧೀನಾಧಿಕಾರಿಗಳು, ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್, 3ನೇ ಮಹಡಿ, ಬೆಂಗಳೂರು–1 ಇವರ ಕಾರ್ಯಾಲಯದಲ್ಲಿ ಇಡಲಾಗಿದೆ.

**ಅನುಸೂಚಿ**

**ಜಿಲ್ಲೆ:** ಬೆಂಗಳೂರು **ತಾಲ್ಲೂಕು:** ದಕ್ಷಿಣ **ಹೋಬಳಿ:** ಉತ್ತರಹಳ್ಳಿ **ಗ್ರಾಮ:** ಉತ್ತರಹಳ್ಳಿ

| ಕ್ರ. ಸಂ. | ಖಾತೆದಾರರ ಹೆಸರು | ಅನುಭವದಾರರ ಹೆಸರು | ಸ. ನಂ. | ತರಹೆ | ಚಕ್ಕುಬಂದಿ | | | | ಭೂಸ್ವಾಧೀನಕ್ಕೆ ಬೇಕಾದ ಜಮೀನಿನ ವಿಸ್ತೀರ್ಣ | |
|---|---|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | ಎ–ಗುಂ | ಆಕಾರ |
| 1. | ಶ್ರೀ ವಸಂತಕುಮಾರ್, ಸಚ್ಚಿದಾನಂದಮೂರ್ತಿ, ಶಾಂತಮಣಿ, ಶಾರದಮಣಿ | ಸದರ | 113 | ಖುಷ್ಕಿ | ಸನಂ 1 | ರಸ್ತೆ | ಸ ನಂ 113ರ ಉಳಿದ ಜಮೀನು | ರಸ್ತೆ ಮತ್ತು ಊರು | 0–03 | 3–00 |

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 6